# ಕರ್ನಾಟಕ ವಿಧಾನ ಪರಿಷತ್

ಸದಸ್ಯರ ಹೆಸರು: ಶ್ರೀ ಎಸ್.ರುದ್ರೇಗೌಡ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 117

ಉತ್ತರಿಸುವ ಸಚಿವರು ಮಾನ್ಯ ಕೃಷಿ ಸಚಿವರು

ಉತ್ತರಿಸಬೇಕಾದ ದಿನಾಂಕ: 15-07-2019

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | 2013ರಲ್ಲಿ ಶಿವಮೊಗ್ಗ ನಗರದಲ್ಲಿ ನೂತನವಾಗಿ ಪ್ರಾರಂಭಗೊಂಡ ಕೃಷಿ ಮತ್ತು ತೋಟಗಾರಿಕೆ ವಿಶ್ವವಿದ್ಯಾಲಯದಲ್ಲಿ ಸಿಬ್ಬಂದಿ ನೇಮಕಾತಿ ಮಾಡಿಕೊಳ್ಳುವ ಸಂಬಂಧ ನಿರ್ದೇಶಕರು, ಬೋಧಕರು ಹಾಗೂ ಬೋಧಕೇತರ ಸಿಬ್ಬಂದಿಯ ನೇಮಕಾತಿಯ ಪ್ರಕ್ರಿಯೆಯನ್ನು 2015ರಲ್ಲಿ ಅಧಿಸೂಚನೆ ಹೊರಡಿಸಿ ಈ ನೇಮಕಾತಿ ಪ್ರಕ್ರಿಯೆಯನ್ನು ಯಾವುದೇ ಕಾರಣ ನೀಡದೆ ರದ್ದುಗೊಳಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: ಬಂದಿದ್ದಲ್ಲಿ ಇದಕ್ಕೆ ಕಾರಣವೇನು? | 2013 ರಲ್ಲಿ ನೂತನವಾಗಿ ಪ್ರಾರಂಭಗೊಂಡ ಕೃಷಿ ಮತ್ತು ತೋಟಗಾರಿಕೆ ವಿಶ್ವವಿದ್ಯಾಲಯ, ಶಿವಮೊಗ್ಗದಲ್ಲಿ ಸಿಬ್ಬಂದ ನೇಮಕಾತಿ ಮಾಡಿಕೊಳ್ಳುವ ಸಂಬಂಧ ನಿರ್ದೇಶಕರು, ಬೋಧಕರು ಹಾಗೂ ಬೋಧಕೇತರ ಸಿಬ್ಬಂದಿಯ ನೇಮಕಾತಿ ಪ್ರಕ್ರಿಯೆಯನ್ನು 2015 ಮತ್ತು 2017 ರಲ್ಲಿ ಅಧಿಸೂಚಿಸಲಾಗಿದ್ದು, ಈ ಅಧಿಸೂಚನೆಗಳಲ್ಲಿ ನಿರ್ದೇಶಕರ ನೇಮಕಾತಿ ಪ್ರಕ್ರಿಯೆಯು ಪೂರ್ಣಗೊಂಡಿರುತ್ತದೆ. ಬೋಧಕರು ಹಾಗೂ ಬೋಧಕೇತರ ಹುದ್ದೆಗಳಿಗೂ 2015 ರಲ್ಲಿ ನೇಮಕಾತಿಗೆ ಅಧಿಸೂಚನೆ ನೀಡಲಾಗಿತ್ತು. ಆದರೆ ಹೈದ್ರಾಬಾದ್ ಕರ್ನಾಟಕ ಅಭ್ಯರ್ಥಿಗಳಿಗೆ ಮೀಸಲಿರಿಸುವ ವಿಚಾರವಾಗಿ ಮತ್ತು ಬದಲಾದ ರೋಸ್ಟರನ್ನು ಸರಿಪಡಿಸುವ ವಿಚಾರವಾಗಿ ನೇಮಕಾತಿ ತಡವಾಗಿರುತ್ತದೆ ಹಾಗೂ ಖಾಯಂ ಕುಲಪತಿಗಳು ಇಲ್ಲದೇ ಇದ್ದುದರಿಂದ ನೇಮಕಾತಿ ಪ್ರಕ್ರಿಯೆ ತಡವಾಗಿರುತ್ತದೆ. ಹುದ್ದೆಗಳ ಸಂಖ್ಯೆಯಲ್ಲಿ ಮತ್ತು ರೋಸ್ಟರ್ ಬದಲಾವಣೆ ಆಗಿದ್ದುದನ್ನು ದೃಢಪಡಿಸಿಕೊಳ್ಳುವ ಸಲುವಾಗಿ ಈ ಎಲ್ಲಾ ನೇಮಕಾತಿ ಪ್ರಕ್ರಿಯೆಗಳು ತಡವಾಗಿರುತ್ತವೆ. ಈ ಕುರಿತಂತೆ ಹೊರಡಿಸಲಾಗಿರುವ ಅಧಿಸೂಚನೆಗೆ ಸಂಬಂಧಿಸಿದಂತೆ 6 ಜನ ಅಭ್ಯರ್ಥಿಗಳು ನ್ಯಾಯಾಲಯದಲ್ಲಿ ಪ್ರಕರಣ ದಾಖಲಿಸಿರುತ್ತಾರೆ. |
| ಆ) | 2018ರಲ್ಲಿ ಪುನಃ ನೇಮಕಾತಿಗೆ ವಿ.ವಿ.ಗೆ ನಿರ್ದೇಶಕರನ್ನೊಳಗೊಂಡ ಸಿಬ್ಬಂದಿ ನೇಮಕಾತಿ ಪ್ರಕ್ರಿಯೆ ಆರಂಭಿಸಿ ಅರ್ಜಿ | ಕೃಷಿ ಮತ್ತು ತೋಟಗಾರಿಕೆ ವಿಶ್ವವಿದ್ಯಾಲಯಕ್ಕೆ 2018 ರಲ್ಲಿ ನಿರ್ದೇಶಕರನ್ನೊಳಗೊಂಡ ಸಿಬ್ಬಂದಿ ನೇಮಕಾತಿ ಪ್ರಕ್ರಿಯೆ ಆರಂಭಿಸಿ ಅರ್ಜಿಗಳನ್ನು ಸ್ವೀಕರಿಸಲಾಗಿತ್ತು, ಆದರೆ |

| | | |
|---|---|---|
| | ಸ್ವೀಕರಿಸಿದ್ದರೂ ಈವರೆವಿಗೂ ಯಾವುದೇ ಪ್ರಕ್ರಿಯೆ ಆರಂಭಗೊಂಡಿರದಿರಲು ಕಾರಣವೇನು ? | ರಾಜ್ಯದ ಎಲ್ಲಾ ಕೃಷಿ ವಿಶ್ವವಿದ್ಯಾಲಯಗಳಲ್ಲಿರುವ ಸ್ಕೋರ್ ಕಾರ್ಡ್‌ಗಳಲ್ಲಿ ಬದಲಾವಣೆ ಕಂಡುಬಂದಿರುವುದರಿಂದ ಎಲ್ಲಾ ವಿಶ್ವವಿದ್ಯಾಲಯಗಳು ಏಕ ರೀತಿಯ ಸ್ಕೋರ್ ಕಾರ್ಡ್‌ನ್ನು ಅಳವಡಿಸಿಕೊಳ್ಳಬೇಕೆಂದು ಆದೇಶ ಹೊರಡಿಸಲಾಗಿರುತ್ತದೆ. ಅದರಂತೆ ಏಕ ಮಾದರಿಯ ಹೊಸ ಸ್ಕೋರ್ ಕಾರ್ಡ್‌ನ್ನು ಅಳವಡಿಸಿಕೊಂಡು ಮುಂದಿನ ದಿನಗಳಲ್ಲಿ ನೇಮಕಾತಿ ಅಧಿಸೂಚನೆ ಹೊರಡಿಸಲಾಗುವುದು. |
| ಇ) | ಪ್ರಸ್ತುತ ವಿ.ವಿ.ಯಲ್ಲಿ ಶೇ.50 ಕ್ಕಿಂತಲು ಕಡಿಮೆ ಇರುವ ಬೋಧಕ ಮತ್ತು ಬೋಧಕೇತರ ಸಿಬ್ಬಂದಿ ವಿ.ವಿ.ಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಮಾಹಿತಿ ಸರ್ಕಾರದ ಗಮನಕ್ಕೆ ಬಂದಿದೆಯೇ? | ಬಂದಿದೆ. ಬೋಧಕ ಮತ್ತು ಬೋಧಕೇತರ ಹುದ್ದೆಗಳನ್ನು ಹೊಸದಾಗಿ ಒಟ್ಟು 432 ಸೃಜಿಸುವ ಕುರಿತ ಪ್ರಸ್ತಾವನೆಯು ಪರಿಶೀಲನೆಯಲ್ಲಿರುತ್ತದೆ. |
| ಈ) | ಈ ಬೆಳವಣಿಗೆ, ವಿ.ವಿಯಲ್ಲಿ ಗುಣಮಟ್ಟ ಮತ್ತು ವಿದ್ಯಾರ್ಥಿಗಳ ಶೈಕ್ಷಣಿಕ ಪ್ರಗತಿಗೆ ಮಾರಕವಾಗುವುದಿಲ್ಲವೇ? ಈ ಕುರಿತು ಸರ್ಕಾರ ಕೈಗೊಂಡಿರುವ ಕ್ರಮಗಳೇನು? (ವಿವರ ನೀಡುವುದು) | ವಿಶ್ವವಿದ್ಯಾಲಯದಲ್ಲಿ ಬೋಧಕರ ಕೊರತೆಯಿಂದಾಗಿ ವಿದ್ಯಾರ್ಥಿಗಳ ಶೈಕ್ಷಣಿಕ ಪ್ರಗತಿ ಹಾಗೂ ಗುಣಮಟ್ಟದಲ್ಲಿ ವ್ಯತ್ಯಯವಾಗದಂತೆ ವಿದ್ಯಾರ್ಥಿಗಳ ಹಿತದೃಷ್ಟಿಯಿಂದ 50 ಕ್ಕಿಂತ ಹೆಚ್ಚು ನುರಿತ ಬೋಧಕರುಗಳನ್ನು ಗುತ್ತಿಗೆ ಆಧಾರದ ಮೇಲೆ ನೇಮಕ ಮಾಡಿಕೊಳ್ಳಲಾಗಿರುತ್ತದೆ. |

ಸಂಖ್ಯೆ: ಕೃಇ 12 ಕೃವಿಶಿ 2019

(ಎನ್.ಹೆಚ್.ಶಿವಶಂಕರರೆಡ್ಡಿ)

ಕೃಷಿ ಸಚಿವರು